## ಕರ್ನಾಟಕ ವಿಧಾನ ಪರಿಷತ್

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 826
2. ಸದಸ್ಯರ ಹೆಸರು : ಶ್ರೀ ಕೆ.ಹರೀಶ್ ಕುಮಾರ್
3. ಉತ್ತರಿಸಬೇಕಾದ ದಿನಾಂಕ : 15.12.2020.
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

*****

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| 1 | ಕೇಂದ್ರ ಸರ್ಕಾರದ ಸೂಚನೆ ಮೇರೆಗೆ ಕರ್ನಾಟಕ ಸರ್ಕಾರವು ಎ.ಪಿ.ಎಂ.ಸಿ. ಕಾಯ್ದೆ ತಿದ್ದುಪಡಿ ತಂದಿದ್ದು, ಹಲವು ವರ್ಷಗಳಿಂದ ಹೊರಗುತ್ತಿಗೆ ಆಧಾರದ ಮೇಲೆ ಕನಿಷ್ಠ ವೇತನದಡಿ ದುಡಿಯುತ್ತಿರುವ ನೌಕರರನ್ನು ಸೇವೆಯಿಂದ ಕೈಬಿಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಎ.ಪಿ.ಎಂ.ಸಿ. ಕಾಯ್ದೆ ತಿದ್ದುಪಡಿಯಿಂದ ಮಾನವ ಸಂಪನ್ಮೂಲ ಸೇವೆ ಒದಗಿಸುವ ಏಜೆನ್ಸಿಯ ಮೂಲಕ ಪಡೆದಿರುವ ಭದ್ರತಾ/ಸ್ವಚ್ಚತಾ/ಡಾಟಾ ಎಂಟ್ರಿ ಆಪರೇಟರ್‌ಗಳನ್ನು ಸೇವೆಯಿಂದ ಕೈಬಿಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| 2 | ಬಂದಿದ್ದಲ್ಲಿ, ಕನಿಷ್ಠ ವೇತನದಡಿಯಲ್ಲಿ ದುಡಿಯುತ್ತಿರುವ ನೌಕರರನ್ನು ಏಕಾಏಕಿ ಕೆಲಸದಿಂದ ತೆಗೆದಿರುವುದರಿಂದ ಇವರನ್ನೇ ನಂಬಿರುವ ಕುಟುಂಬದವರು ಬೀದಿಪಾಲಾಗುತ್ತಿರುವುದರಿಂದ, ಸದರಿ ಕಾರ್ಯನಿರ್ವಹಿಸುತ್ತಿರುವ ಹೊರಗುತ್ತಿಗೆ ನೌಕರರನ್ನು ಮುಂದುವರೆಸುವ ಕುರಿತು ಸರ್ಕಾರದ ನಿಲುವೇನು? | ರಾಜ್ಯದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಲ್ಲಿ ಸಂಪನ್ಮೂಲಕ್ಕನುಗುಣವಾಗಿ ಭದ್ರತಾ/ಸ್ವಚ್ಚತಾ ಸಿಬ್ಬಂದಿ ಸೇವೆಯನ್ನು ಕಾರ್ಮಿಕ ಇಲಾಖೆಯು ನಿಗಧಿಪಡಿಸುವ ಕನಿಷ್ಠ ವೇತನ ದರಗಳನ್ವಯ ಖಾಸಗಿ ಮಾನವ ಸಂಪನ್ಮೂಲ ಸೇವೆ ಒದಗಿಸುವ ಏಜೆನ್ಸಿಗಳ ಮುಖಾಂತರ ಹೊರಗುತ್ತಿಗೆ ಆಧಾರದ ಮೇರೆಗೆ ಪಡೆಯಲಾಗುತ್ತಿದೆ. ಸದರಿ ಸಿಬ್ಬಂದಿಗಳಿಗೆ ತಗಲುವ ವೇತನ, ಭತ್ಯೆ ಹಾಗೂ ಇತರೆ ವೆಚ್ಚಗಳನ್ನು ಸಮಿತಿಯ ನಿಧಿಯಿಂದ ಭರಿಸಲಾಗುತ್ತಿದೆ.<br><br>ದಿನಾಂಕ:16.05.2020ರಿಂದ ಜಾರಿಗೆ ಬರುವಂತೆ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 8 ಮತ್ತು 117ಕ್ಕೆ ತಿದ್ದುಪಡಿ ಮಾಡಿರುವುದರಿಂದ ಮಾರುಕಟ್ಟೆ ಸಮಿತಿಗಳ ನಿಯಂತ್ರಣವನ್ನು ಮಾರುಕಟ್ಟೆ ಪ್ರಾಂಗಣಕ್ಕೆ ಮಾತ್ರ ಸೀಮಿತ ಗೊಳಿಸಲಾಗಿರುತ್ತದೆ.<br><br>ಕೇಂದ್ರ ಸರ್ಕಾರದ The Farmers Produce Trade and Commerce (Promotion and Facilitation ) ACT 2020 ದಿನಾಂಕ:27.09.2020 ರನ್ವಯ ರಾಜ್ಯದ ಎ.ಪಿ.ಎಂ.ಸಿ. ಪ್ರಾಂಗಣದ ಹೊರಗೆ ಟ್ರೇಡ್ ಏರಿಯಾದಲ್ಲಿ ರಾಜ್ಯ ಎ.ಪಿ.ಎಂ.ಸಿ. ಕಾಯ್ದೆಯ ನಿಯಂತ್ರಣಕ್ಕೆ ಒಳಪಡುವುದಿಲ್ಲ.<br><br>ಸರ್ಕಾರದ ಆದೇಶ ಸಂ:ಸಇ/306/ ಎಂಆರ್‌ಇ/ 2020/ಇ.ಆ ಬೆಂಗಳೂರು, ದಿನಾಂಕ:21.07.2020ರಲ್ಲಿ |

| | | |
|---|---|---|
| | | ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 65(2)ರ ಮೇರೆಗೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಆಕರಿಸುವ ಮಾರುಕಟ್ಟೆ ಶುಲ್ಕವನ್ನು ಮಾರ್ಪಡಿಸಿ ಎಲ್ಲಾ ಅಧಿಸೂಚಿತ ಕೃಷಿ ಉತ್ಪನ್ನಗಳಿಗೆ ಶೇ.1.5 ರಿಂದ ಶೇ.1ಕ್ಕೆ ನಂತರ ದಿನಾಂಕ:04.08.2020ರ ಆದೇಶದಲ್ಲಿ ಶೇ.0.35 ರಂತೆ ಮಾರುಕಟ್ಟೆ ಶುಲ್ಕ ಆಕರಣೆ ಮಾಡಲು ಆದೇಶಿಸಲಾಗಿರುತ್ತದೆ.<br><br>ಶೇ.0.35ರಂತೆ ವಸೂಲಾಗುವ ಮಾರುಕಟ್ಟೆ ಶುಲ್ಕದಲ್ಲಿ ಕೃಷಿ ಮಾರಾಟ ಮಂಡಳಿಗೆ ಶೇ. 0.04, ಆವರ್ತನಿಧಿಗೆ ಶೇ.0.15, ರೆಮ್ಸ್ ಸಂಸ್ಥೆಗೆ ವಹಿವಾಟು ಶುಲ್ಕ ಶೇ.0.02 ಹಾಗೂ ಪ್ರಾಂಗಣದಲ್ಲಿ ಮೂಲಭೂತ ಸೌಕರ್ಯ, ನಿರ್ವಹಣೆ ಮತ್ತು ಸಮಿತಿ ಆಡಳಿತ ವೆಚ್ಚಗಳಿಗೆ ಶೇ.0.14 ರಂತೆ ನಿಗದಿಪಡಿಸಲಾಗಿರುತ್ತದೆ. ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಪ್ರಾಂಗಣದ ನಿರ್ವಹಣೆ, ಸ್ವಚ್ಛತೆಯನ್ನು ಶೇ.0.14ರಂತೆ ವಸೂಲಾಗುವ ಮಾರುಕಟ್ಟೆ ಶುಲ್ಕದ ಮಿತಿಯೊಳಗೆ ನಿರ್ವಹಿಸಬೇಕಿದೆ.<br><br>ಈ ಹಿನ್ನೆಲೆಯಲ್ಲಿ ಸಮಿತಿಗಳಿಗೆ ಬರುವ ಆದಾಯ ಮತ್ತು ಅವಶ್ಯಕತೆಗೆ ಅನುಗುಣವಾಗಿ ಭದ್ರತಾ/ಸ್ವಚ್ಛತಾ ಸಿಬ್ಬಂದಿ ಸೇವೆಗಳನ್ನು ಪಡೆಯಲಾಗುತ್ತಿರುತ್ತದೆ. |

**ಸಂಖ್ಯೆ:ಸಿಒ 626 ಎಂಆರ್‌ಇ 2020**

(ಎಸ್.ಟಿ.ಸೋಮಶೇಖರ್)
ಸಹಕಾರ ಸಚಿವರು